# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಡಿಸೆಂಬರ್ ೮, ೨೦೧೬ (ಮಾರ್ಗಶಿರ ೧೭, ಶಕ ವರ್ಷ ೧೯೩೮)<br>Bengaluru, Thursday, December 8, 2016 (Margashira 17, Shaka Varsha 1938) | ಸಂಚಿಕೆ ೪೮<br>Issue 48 |
|---|---|---|


## ಭಾಗ ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಪೊಲೀಸ್ ಇಲಾಖೆ**

**ಅಧಿಸೂಚನೆ**

**ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು–63**

**ಇಲ್ಲಿನ ಅನುಯಾಯಿ ಹುದ್ದೆಗಳ ನೇಮಕಾತಿ ಅಧಿಸೂಚನೆ ಸಂಖ್ಯೆ:ಸಪೊತಶಾ/ಸಿಬ್ಬಂದಿ/22/2016–17, ದಿನಾಂಕ:07–11–2016**

**ವಿಷಯ:** ಅನುಯಾಯಿ (ಪುರುಷ & ಮಹಿಳೆ) ಹುದ್ದೆಗಳ ನೇರ ನೇಮಕಾತಿ 2016 ಕುರಿತು.

1) ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು–63 ಇಲ್ಲಿ ಖಾಲಿಯಿರುವ 10 ಅನುಯಾಯಿ ಹುದ್ದೆಗಳ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ ಸೇವೆಗಳು, ಲಿಪಿಕ ವೃಂದ ಸೇರಿದಂತೆ (ನೇಮಕಾತಿ) ನಿಯಮಗಳು 2004, ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 140 ಇಎಫ್‌ಎಸ್ 2014, ದಿನಾಂಕ:28.10.2015 ಮತ್ತು ಮಾನ್ಯ ಪೊಲೀಸ್ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ರವರ ಆದೇಶ ಸಂಖ್ಯೆ:39/ಸಿಬ್ಬಂದಿ–3/2014–15, ದಿನಾಂಕ:08.09.2016ರಲ್ಲಿ ಮತ್ತು ಪೊಲೀಸ್ ಮಹಾ ನಿರ್ದೇಶಕರು, ತರಬೇತಿ, ಬೆಂಗಳೂರುರವರ ಪತ್ರದ ಸಂಖ್ಯೆ: ತ/ಸಿಬ್ಬಂದಿ–1/393/2015–16, ದಿನಾಂಕ:25.10.2016 ರಲ್ಲಿ ಅನುಮತಿಸಿರುವಂತೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

2) ಅರ್ಜಿಗಳನ್ನು ಪ್ರಾಂಶುಪಾಲರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು–560063 ರವರ ಕಛೇರಿಗೆ ಖುದ್ದಾಗಿ ಅಥವಾ ಅಂಚೆ ಮೂಲಕ ಸಲ್ಲಿಸಲು ತಿಳಿಸಲಾಗಿದೆ.

3) **ಅರ್ಜಿ ಶುಲ್ಕ:**

| | |
|---|---|
| ಸಾಮಾನ್ಯ ವರ್ಗ, 2(ಎ), 2(ಬಿ), 3(ಎ), 3(ಬಿ)ಗೆ ಸೇರಿದ ಅಭ್ಯರ್ಥಿಗಳಿಗೆ | ರೂ. 250.00 |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ | ರೂ. 100.00 |

ನಿಗಧಿತ ಶುಲ್ಕಕ್ಕೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಬ್ಯಾಂಕಿನ ಅಧಿಕೃತ ಶಾಖೆಗಳಿಂದ ಡಿ.ಡಿ.ಯನ್ನು "ಪ್ರಾಂಶುಪಾಲರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು–560063 (The Principal, Armed Police Training School, Yelahanka, Bengaluru-560063)ರವರ ಹೆಸರಿನಲ್ಲಿ ಪಡೆದು ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸುವುದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ/ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

4) **ಅರ್ಜಿ ಸಲ್ಲಿಸುವ ವಿಧಾನ :**

ನಿಗಧಿತ ನಮೂನೆಯ ಅರ್ಜಿ ಹಾಗೂ ಮಾಹಿತಿ/ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.inನಲ್ಲಿ ಪ್ರಕಟಿಸಲಾಗಿದೆ. ಹಾಗೂ ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು–63 ಕಛೇರಿಯ ಸೂಚನಾ ಫಲಕದಲ್ಲೂ ಪ್ರಕಟಿಸಲಾಗಿರುತ್ತದೆ. ಅರ್ಜಿ ನಮೂನೆಯನ್ನು ಅಭ್ಯರ್ಥಿಗಳು ತಮ್ಮ ವೈಯಕ್ತಿಕ ಖರ್ಚಿನಲ್ಲಿ ಬೆರಳಚ್ಚು ಮಾಡಿಸಿ, ಪಾಸ್‌ಪೋರ್ಟ್ ಅಳತೆಯ–2 ಬಣ್ಣದ ಭಾವಚಿತ್ರ ಹಾಗೂ ಸಹಿಯೊಂದಿಗೆ ಅರ್ಜಿಯಲ್ಲಿರುವ ಎಲ್ಲಾ ವಿವರಗಳನ್ನು ಸಮರ್ಪಕವಾಗಿ ಭರ್ತಿಮಾಡಿ, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು–63 ಕಛೇರಿಗೆ ಸಲ್ಲಿಸುವುದು.

- ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕ: 21–11–2016 ಬೆಳಿಗ್ಗೆ 10 ಗಂಟೆಯಿಂದ.
- ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 31–12–2016 ಸಂಜೆ 05 ಗಂಟೆಯವರೆಗೆ.

**ಸೂಚನೆ :**

- ನಿಗಧಿತ ದಿನಾಂಕ ಹಾಗೂ ಸಮಯದೊಳಗೆ ಸಲ್ಲಿಸಲಾಗುವ ಅರ್ಜಿಗಳನ್ನು ಮಾತ್ರ ಪರಿಗಣಿಸಲಾಗುವುದು.
- ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಈ ಕಛೇರಿಗೆ ತಲುಪದಿದ್ದಲ್ಲಿ, ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲವೆಂದು ತಿಳಿಸಲಾಗಿದೆ.
- ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.

**ಅನುಯಾಯಿ ಪುರುಷ/ಮಹಿಳೆ ಖಾಲಿ ಹುದ್ದೆಗಳ ವರ್ಗೀಕರಣ**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರೆ |
|---|---|---|---|---|---|---|---|
| ಸಾಮಾನ್ಯ ವರ್ಗ | 4 | 2 | 0 | 1 | 0 | 1 | 0 |
| ಪರಿಶಿಷ್ಠ ಜಾತಿ | 0 | 0 | 0 | 0 | 0 | 0 | 0 |
| ಪರಿಶಿಷ್ಠ ಪಂಗಡ | 0 | 0 | 0 | 0 | 0 | 0 | 0 |
| ಪ್ರವರ್ಗ–1 | 0 | 0 | 0 | 0 | 0 | 0 | 0 |
| ಪ್ರವರ್ಗ–2ಎ | 1 | 1 | 0 | 0 | 0 | 0 | 0 |
| ಪ್ರವರ್ಗ–2ಬಿ | 1 | 0 | 0 | 0 | 0 | 0 | 1 |
| ಪ್ರವರ್ಗ–3ಎ | 0 | 0 | 0 | 0 | 0 | 0 | 0 |
| ಪ್ರವರ್ಗ–3ಬಿ | 1 | 1 | 0 | 0 | 0 | 0 | 0 |
| **ಒಟ್ಟು** | **7** | **4** | **0** | **1** | **0** | **1** | **1** |

**ಹೈದರಾಬಾದ್ ಕರ್ನಾಟಕ ಮೀಸಲಾತಿಗೊಳಪಡುವ ಹುದ್ದೆಗಳ ವಿವರ:**

**ಅನುಯಾಯಿ 3 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ.**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರೆ |
|---|---|---|---|---|---|---|---|
| ಸಾಮಾನ್ಯ ವರ್ಗ | 2 | 1 | 0 | 0 | 0 | 0 | 1 |
| ಪರಿಶಿಷ್ಠ ಜಾತಿ | 1 | 0 | 0 | 0 | 0 | 0 | 1 |
| ಪರಿಶಿಷ್ಠ ಪಂಗಡ | 0 | 0 | 0 | 0 | 0 | 0 | 0 |
| ಪ್ರವರ್ಗ–1 | 0 | 0 | 0 | 0 | 0 | 0 | 0 |
| ಪ್ರವರ್ಗ–2ಎ | 0 | 0 | 0 | 0 | 0 | 0 | 0 |
| ಪ್ರವರ್ಗ–2ಬಿ | 0 | 0 | 0 | 0 | 0 | 0 | 0 |
| ಪ್ರವರ್ಗ–3ಎ | 0 | 0 | 0 | 0 | 0 | 0 | 0 |
| ಪ್ರವರ್ಗ–3ಬಿ | 0 | 0 | 0 | 0 | 0 | 0 | 0 |
| **ಒಟ್ಟು** | **3** | **1** | **0** | **0** | **0** | **0** | **2** |

**ವೃತ್ತಿವಾರು ಖಾಲಿಯಿರುವ ಹುದ್ದೆಗಳ ವಿವರ :**

| ಕ್ರ.ಸಂ. | ವೃತ್ತಿ (Trade) | ರಿಕ್ತಸ್ಥಾನ |
|---|---|---|
| 1 | ವೆಟ್ ಸ್ವೀಪರ್ | 2 |
| 2 | ಬಟ್ಟೆ ಒಗೆಯುವವರು(ದೋಬಿ) | 1 |
| 3 | ಅಡುಗೆ ಮಾಡುವವರು | 4 |
| 4 | ಬಾರ್ಬರ್ | 2 |
| 5 | ಎಲೆಕ್ಟ್ರೀಷಿಯನ್ | 1 |
| **ಒಟ್ಟು** | | **10** |

**ಟಿಪ್ಪಣಿ:** ಅನುಯಾಯಿ ಹುದ್ದೆಗಳಲ್ಲಿ ವೃತ್ತಿವಾರು ಖಾಲಿಯಿರುವ ಹುದ್ದೆಗಳನ್ನು ಭರ್ತಿ ಮಾಡುವಾಗ, ಮೇಲೆ ಅಧಿಸೂಚನೆ ಹೊರಡಿಸಿರುವ ಪ್ರವರ್ಗ–2(ಎ), 2(ಬಿ) ಮತ್ತು ಪ್ರವರ್ಗ–3(ಬಿ) ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಸದರಿ ಖಾಲಿ ಹುದ್ದೆಗಳನ್ನು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ/08/ಸೆಹಿಮ/95, ದಿನಾಂಕ:20.06.1995ರನ್ವಯ ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು ಮತ್ತು ನಷ್ಟಗೊಂಡ ರಿಕ್ತ ಸ್ಥಾನಗಳನ್ನು ತದನಂತರದ ನೇರ ನೇಮಕಾತಿಗಳಲ್ಲಿ ಸರಿದೂಗಿಸಿಕೊಳ್ಳಲಾಗುವುದು.

5) **ಅರ್ಹತಾ ಷರತ್ತುಗಳು :**

i. ಭಾರತೀಯನಾಗಿರತಕ್ಕದ್ದು.

ii. ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

iii. ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತನಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವವಿರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

6) **ವಯೋಮಿತಿ :**

i. ಸಾಮಾನ್ಯ ಮತ್ತು ಮಹಿಳಾ ಅಭ್ಯರ್ಥಿಗಳಿಗೆ :

ಅರ್ಜಿಯನ್ನು ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಅಂದರೆ ದಿನಾಂಕ:31.12.2016 ಕ್ಕೆ ಅಭ್ಯರ್ಥಿಗೆ ಕನಿಷ್ಠ 19 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 30 ವರ್ಷಗಳು.

ಆ) ಇತರೆ (ಸಾಮಾನ್ಯ) ಅಭ್ಯರ್ಥಿಗಳಿಗೆ 25 ವರ್ಷಗಳು.

7) **ವಿದ್ಯಾರ್ಹತೆ :**

ಅನುಯಾಯಿ ಹುದ್ದೆಗೆ 7ನೇ ತರಗತಿಯನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕ:31.12.2016 ರೊಳಗೆ ಉತ್ತೀರ್ಣರಾಗಿರಬೇಕು.

**ಆದ್ಯತೆ (Preference) :**

ಅರ್ಜಿದಾರರು ಅರ್ಜಿ ಸಲ್ಲಿಸುವ ಹುದ್ದೆಗೆ ಸಂಬಂಧಿಸಿದ ವೃತ್ತಿಪರ **(Trade)** ಶಿಕ್ಷಣದಲ್ಲಿ ನೈಪುಣ್ಯತೆ ಹೊಂದಿದವರಿಗೆ ಆದ್ಯತೆ ನೀಡಲಾಗುವುದು.

**ಟಿಪ್ಪಣಿ :**

1. ನಿಗಧಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೇ ಇರುವ ಅಭ್ಯರ್ಥಿಗಳ ಅರ್ಜಿಯನ್ನು ತಿರಸ್ಕರಿಸಲಾಗುವುದು. ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ನಿಗಧಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗಿರುವುದಿಲ್ಲ.
2. ನಿಗಧಿತ ವಿದ್ಯಾರ್ಹತೆಯನ್ನು ಹೊರತುಪಡಿಸಿ, ಬೇರೆ ಯಾವ ವಿದ್ಯಾರ್ಹತೆಯನ್ನು ಪರಿಗಣಿಸಲಾಗುವುದಿಲ್ಲ. ಕೊನೆಯ ದಿನಾಂಕಕ್ಕೆ ಎಲ್ಲಾ ಅಭ್ಯರ್ಥಿಗಳು 7ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣಹೊಂದಿದ ಅಂಕಪಟ್ಟಿಯನ್ನು ಹೊಂದಿರಬೇಕು.

8) **ಖಾಯಂ ಪೂರ್ವ ಅವಧಿ, ವೇತನ ಶ್ರೇಣಿ ಮತ್ತು ಪಿಂಚಣಿ ಸೌಲಭ್ಯ :**

ಅ) ನೇಮಕಾತಿಯಾದ ಅಭ್ಯರ್ಥಿಗಳು 2 ವರ್ಷದ ಖಾಯಂಪೂರ್ವ ಅವಧಿಯಲ್ಲಿರುತ್ತಾರೆ.

ಆ) ವೇತನ ಶ್ರೇಣಿ ₹.10400–200–12000–250–13000–300–14200–350–15600–400–16400

ಇ) ಪಿಂಚಣಿ ಸೌಲಭ್ಯ : ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ(ಎಸ್‌ಪಿಎಲ್)/04/ಪಿಇಟಿ/2005, ದಿನಾಂಕ:31.03.2006ರಂತೆ ನೂತನ ಅಂಶದಾಯಿ ಪಿಂಚಣಿ ಸೌಲಭ್ಯ ಅನ್ವಯವಾಗುವುದು.

9) **ಆಯ್ಕೆ / ಲಿಖಿತ ಪರೀಕ್ಷೆ :**

ಕರ್ನಾಟಕ ರಾಜ್ಯ ಪೊಲೀಸ್ ಸೇವೆಗಳು, ಲಿಪಿಕ ವೃಂದ ಸೇರಿದಂತೆ (ನೇಮಕಾತಿ) ನಿಯಮಗಳು 2004ರ ಪ್ರಕಾರ ಅರ್ಜಿ ಸಲ್ಲಿಸಿದ್ದ ಅಭ್ಯರ್ಥಿಗಳಲ್ಲಿ, ಅರ್ಹ ಅಭ್ಯರ್ಥಿಗಳಿಗೆ ಕನ್ನಡದಲ್ಲಿ ಪ್ರಬಂಧವನ್ನೊಳಗೊಂಡ 50 ಅಂಕಗಳ ಲಿಖಿತ ಪರೀಕ್ಷೆಯನ್ನು ಬೆಂಗಳೂರು ನಗರದಲ್ಲಿ ನಡೆಸಲಾಗುವುದು.

ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಹಾಜರಾಗುವಾಗ ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ದೃಢೀಕೃತ ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

1. ಪಾಸ್‌ಪೋರ್ಟ್
2. ಚಾಲನಾ ಪರವಾನಗಿ ಪತ್ರ
3. ಪ್ಯಾನ್ ಕಾರ್ಡ್
4. ರಾಜ್ಯ ಸರ್ಕಾರ/ಕೇಂದ್ರ ಸರ್ಕಾರ/ ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗಿ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ

5. ಬ್ಯಾಂಕ್ ಪಾಸ್ ಪುಸ್ತಕ
6. ಭಾವಚಿತ್ರ ಸಮೇತ ನೊಂದಣಿಯಾಗಿರುವ ಸ್ವತ್ತಿನ ದಾಖಲೆ ಪತ್ರ ಅಥವಾ ಪಟ್ಟಾ ಪುಸ್ತಕ
7. ಜಾತಿ ಪ್ರಮಾಣ ಪತ್ರ
8. ಚುನಾವಣಾ ಆಯೋಗದ ಫೋಟೋ ಗುರುತಿನ ಚೀಟಿ
9. ಆಧಾರ್ ಕಾರ್ಡ್

ಲಿಖಿತ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಅಧಿಸೂಚನೆ ಹೊರಡಿಸಿರುವ ಪ್ರವರ್ಗವಾರು ಹುದ್ದೆಗಳಿಗೆ ಅನುಗುಣವಾಗಿ ಪ್ರತಿಯೊಂದು ಹುದ್ದೆಗೆ 1:5ರ ಅನುಪಾತದಲ್ಲಿ ಅರ್ಹ ಅಭ್ಯರ್ಥಿಗಳಿಗೆ ನೈಪುಣ್ಯತೆ ಪರೀಕ್ಷೆಯನ್ನು (Proficiency Test) 50 ಅಂಕಗಳಿಗೆ ಮಾಡಲಾಗುವುದು. ನಂತರ ಸದರಿ ಅಭ್ಯರ್ಥಿಗಳಿಗೆ ವೈದ್ಯಕೀಯ ಪರೀಕ್ಷೆ ಹಾಗೂ ಮೂಲ ದಾಖಲಾತಿಗಳ ಪರೀಕ್ಷೆ ನಡೆಸಲಾಗುವುದು. ಅಭ್ಯರ್ಥಿಗಳು ವೈದ್ಯಕೀಯ ಪರೀಕ್ಷೆಗೆ ನೇಮಕಾತಿ ಸಮಿತಿಯು ರಚಿಸುವ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗತಕ್ಕದ್ದು, ಹಾಜರಾಗುವ ವೇಳೆ, ಸ್ಥಳ ಹಾಗೂ ವೈದ್ಯಕೀಯ ಪರೀಕ್ಷೆಯ ವಿವರಗಳನ್ನು ನೇಮಕಾತಿ ಪ್ರಾಧಿಕಾರವು ನಿಗಧಿಪಡಿಸುವುದು. ವೈದ್ಯಕೀಯ ಮಂಡಳಿಯು ದೈಹಿಕವಾಗಿ ಅರ್ಹರೆಂದು ಪ್ರಮಾಣೀಕರಿಸಿದ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹರಾಗುವರು.

ತದನಂತರ, ಲಿಖಿತ ಪರೀಕ್ಷೆ ಮತ್ತು ನೈಪುಣ್ಯತೆ ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಧಿಸೂಚನೆ ಹೊರಡಿಸಿರುವ ಖಾಲಿ ಹುದ್ದೆಗಳಿಗೆ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗುವುದು. ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಮೊದಲು ಅಂಕಪಟ್ಟಿ ಪರಿಶೀಲನೆ, ಅಭ್ಯರ್ಥಿಗಳ ಗುಣ ಮತ್ತು ನಡತೆ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಪರಿಶೀಲನೆಯನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಮಾಡಿಸಿ, ನಂತರ ನಿಯಮಾನುಸಾರ ಅರ್ಹ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗುವುದು.

ನೇಮಕಾತಿಯಾದ ನಂತರ ಅಭ್ಯರ್ಥಿಗಳಿಗೆ ನೇಮಕಾತಿ ಪ್ರಾಧಿಕಾರವು ಅವರುಗಳು ಆಯ್ಕೆಯಾದ ವೃತ್ತಿಗನುಗುಣವಾಗಿ ಕರ್ತವ್ಯ ಹಂಚಿಕೆಯನ್ನು ಮಾಡಲಾಗುವುದು. ಅದರಂತೆ ಅಭ್ಯರ್ಥಿಗಳು ಕರ್ತವ್ಯ ನಿರ್ವಹಿಸುವುದು. ತಪ್ಪಿದಲ್ಲಿ ನೇಮಕಾತಿ ಆದೇಶವನ್ನು ರದ್ದುಪಡಿಸಲಾಗುವುದು.

**10) ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :**

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಕಂಡ ನಮೂನೆಗಳಲ್ಲಿ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

ಎ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಡಿ ಪ್ರಮಾಣ ಪತ್ರ.

ಬಿ) ಪ್ರವರ್ಗ–1 ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಇ ಪ್ರಮಾಣ ಪತ್ರ.

ಸಿ) ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಎಫ್ ಪ್ರಮಾಣ ಪತ್ರ.

**ಸೂಚನೆ :** ನಮೂನೆ–ಎಫ್ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕ: 31.12.2016ಕ್ಕೆ ಐದು ವರ್ಷಕ್ಕಿಂತ ಹಳೆಯದಾಗಿರಬಾರದು.

**11. ಗ್ರಾಮೀಣ ಮೀಸಲಾತಿ:**

**ಎ)** ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು 1ನೇ ತರಗತಿಯಿಂದ 7ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರಬೇಕು;

**ಬಿ)** ಅಭ್ಯರ್ಥಿಯು ವ್ಯಾಸಂಗ ಮಾಡಿದ ಸ್ಥಳವು ವ್ಯಾಸಂಗ ಮಾಡಿದ ಅವಧಿಯಲ್ಲಿ ಅಂದಿನ ಕರ್ನಾಟಕ ಪೌರ ನಿಗಮಗಳ ಅಧಿನಿಯಮ 1976ರ ಅಥವಾ ಕರ್ನಾಟಕ ಪೌರಸಭೆಗಳ ಅದಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆಯ ಹಂತದಲ್ಲಿರುವ ಪ್ರದೇಶಗಳ ಹೊರತಾಗಿ ಇತರ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಯಾಗಿರಬೇಕು;

ಸಿ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಅಧಿಸೂಚನೆ ಸಂಖ್ಯೆ:ಸಿಆಸುಇ/08/ಸೇನೆನಿ/2001, ದಿನಾಂಕ:13.02.2001ರ ಪ್ರಕಾರ ಮೇಲೆ ಪರಿಭಾಷಿಸಿದಂತೆ ತರಗತಿ 1 ರಿಂದ 7ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರುವವರು ಸರ್ಕಾರಿ ಆದೇಶ ಸಂಖ್ಯೆ.ಸಿಆಸುಇ/96/ಸೇನೆನಿ/2005, ದಿನಾಂಕ: 10.08.2005ರಲ್ಲಿ ನಿಗಧಿಪಡಿಸಿದ ನಮೂನೆ–2ರ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆಯುವುದು. ನಮೂನೆ–1 (ನಾನ್–ಕ್ರೀಮಿ ಲೇಯರ್) ಮತ್ತು ನಮೂನೆ–2 ಇವುಗಳು ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ.

**ಡಿ)** ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಸೇರಿದ ಅಭ್ಯರ್ಥಿಗಳು ನಮೂನೆ–2ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟಪಾಧಿಕಾರದಿಂದ ಪಡೆದು ಸಲ್ಲಿಸುವುದು.

**ಸೂಚನೆ:** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹ ಅಭ್ಯರ್ಥಿಗಳು Non-Creamy Layer ಪ್ರಮಾಣ ಪತ್ರವನ್ನು ಹೊಂದಿರದಿದ್ದಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**12. ಪ್ರಮುಖವಾದ ಸೂಚನೆಗಳು :**

ಅಭ್ಯರ್ಥಿಗಳು ಕೋರುವ ಮೀಸಲಾತಿಗನುಗುಣವಾಗಿ ಈ ಕೆಳಕಂಡ ಪ್ರಮಾಣ ಪತ್ರಗಳ ದೃಢೀಕೃತ ನಕಲು ಪ್ರತಿಗಳನ್ನು ಅರ್ಜಿಯೊಂದಿಗೆ ತಪ್ಪದೇ ಲಗತ್ತಿಸತಕ್ಕದ್ದು.

ಎ) ವಿದ್ಯಾರ್ಹತೆಯ ಅಂಕಪಟ್ಟಿ.

ಬಿ) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಜನನ ಪ್ರಮಾಣ ಪತ್ರ)

ಸಿ) ಸರ್ಕಾರಿ ಇಲಾಖೆಯಲ್ಲಿ / ರಾಜ್ಯ ಸರ್ಕಾರದ / ಕೇಂದ್ರ ಸರ್ಕಾರದ / ಸರ್ಕಾರದ ಯಾವುದೇ ಪ್ರಾಧಿಕಾರದಲ್ಲಿ / ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾ ವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಇಚ್ಛಾ ಅನುಮತಿ ಪತ್ರ.

ಡಿ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ–ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪತ್ರ.

ಇ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು.

<u>**ಟಿಪ್ಪಣಿ :**</u> ಅರ್ಜಿಯನ್ನು ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದ ನಂತರ ಮಾಡಿಸುವ ಮೀಸಲಾತಿ ಪ್ರಮಾಣ ಪತ್ರಗಳನ್ನು ಯಾವುದೇ ಹಂತದಲ್ಲಿ ಗಣನೆಗೆ ತೆಗೆದುಕೊಳ್ಳುವುದಿಲ್ಲ.

**ಎಫ್)** ಅಭ್ಯರ್ಥಿಯು ಅರ್ಜಿಯಲ್ಲಿ ಭರ್ತಿ ಮಾಡಿದ ಮಾಹಿತಿಯು ಅಂತಿಮವಾಗಿರುತ್ತದೆ. ಆದ್ದರಿಂದ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಅರ್ಜಿಯ ಎಲ್ಲಾ ಕಾಲಂಗಳನ್ನು ಸರಿಯಾಗಿ ಭರ್ತಿಮಾಡತಕ್ಕದ್ದು.

**ಜಿ)** ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ತಕ್ಷಣದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಸಂಬಂಧಪಟ್ಟ ಘಟಕಾಧಿಕಾರಿ (ಪೊಲೀಸ್ ಸೂಪರಿಂಟೆಂಡೆಂಟ್/ಪ್ರಾಂಶುಪಾಲರು) ರವರ ನೇಮಕಾತಿ ಸಮಿತಿಯ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ನೇಮಕಾತಿ ಸಮಿತಿಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ನೇಮಕಾತಿ ಸಮಿತಿಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

**ಹೆಚ್)** ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಯಾವುದೇ ಸುಳ್ಳು/ತಪ್ಪು ಮಾಹಿತಿಗಳನ್ನು ನೀಡಬಾರದು. ಹಾಗೇ ನೀಡಿ ತದನಂತರ ನೇಮಕಾತಿ ಸಮಿತಿಗೆ ಅದು ಪತ್ತೆಯಾದಲ್ಲಿ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು.

<u>**13. ವಿಶೇಷ ಸೂಚನೆಗಳು :**</u>

ಅಭ್ಯರ್ಥಿಗಳು ನೇಮಕಾತಿ ಸಮಿತಿಯು ನಿಗಧಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಎಲ್ಲಾ ಅಂಕಣಗಳನ್ನು ಸ್ಪಷ್ಟವಾಗಿ ಭರ್ತಿ ಮಾಡತಕ್ಕದ್ದು. ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸುವ, ಶುಲ್ಕ ಪಾವತಿಸದೆ ಸಲ್ಲಿಸಲ್ಪಡುವ, ಅಪೂರ್ಣವಾಗಿರುವ, ಸಹಿ ಮಾಡದ ಹಾಗೂ ಭಾವಚಿತ್ರ ಇಲ್ಲದೆ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಹಾಗೂ ಈ ಕೆಳಕಂಡ ವಿಶೇಷ ಸೂಚನೆಗಳನ್ನು ಗಮನಿಸುವುದು.

ಎ) ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಕಾಲಂನ್ನು ತುಂಬತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣ ಪ್ರಮಾಣ ಪತ್ರವನ್ನು (No Objection Certificate) ಸಂಬಂಧಿತ ಇಲಾಖಾ ಮುಖ್ಯಸ್ಥರಿಂದ ಪಡೆದು, ಸಲ್ಲಿಸತಕ್ಕದ್ದು.

ಬಿ) ಒಂದು ವೇಳೆ ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ/ಬಂದ್‌ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನದಂದು ಅರ್ಜಿಗಳನ್ನು ಸ್ವೀಕರಿಸಲಾಗುವುದು. ಆದರೆ ವಯೋಮಿತಿ ಹಾಗೂ ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯ ಪರಿಗಣನೆಗೆ ದಿನಾಂಕ:31.12.2016 ಮಾತ್ರ ಅನ್ವಯವಾಗುತ್ತದೆ.

ಸಿ) ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿ ತಿರಸ್ಕೃತವಾದಲ್ಲಿ ತತ್ಸಂಬಂಧ ಯಾವುದೇ ರೀತಿಯ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

ಡಿ) ಕರ್ನಾಟಕ ರಾಜ್ಯದ, ಕೇಂದ್ರ ಸರ್ಕಾರದ ಯಾವುದೇ ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಯ ಸೇವೆಯಿಂದ ವಜಾ ಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

ಇ) ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ವಿನಿಯಮಗಳಿಗೆ (Rules & Regulations) ಬದ್ಧನಾಗಿರುತ್ತಾರೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

**ಎಫ್) ದುರ್ನಡತೆ :** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂದು, ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ನೇಮಕಾತಿ ಸಮಿತಿಯಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಭಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ನೇಮಕಾತಿ ಸಮಿತಿ ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

**ಪ್ರಾಂಶುಪಾಲರು,**
**ಸಶಸ್ತ್ರ ಪೊಲೀಸ್ ತರಬೇತಿ ಶಾಲೆ,**
**ಯಲಹಂಕ, ಬೆಂಗಳೂರು–63**

**ಕರ್ನಾಟಕ ರಾಜ್ಯ ಪೊಲೀಸ್**

**ಪ್ರಾಂಶುಪಾಲರು ರವರ ಕಛೇರಿ, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು–560 063**

**ಅನುಯಾಯಿ ಹುದ್ದೆಗಳ ನೇಮಕಾತಿ 2016 – ಅರ್ಜಿ ನಮೂನೆ**

| ಕ್ರಸಂ | ಒದಗಿಸಬೇಕಾದ ಮಾಹಿತಿ | ಅಭ್ಯರ್ಥಿಯ ವಿವರ |
|---|---|---|
| 1 | ಅರ್ಜಿದಾರರ ಪೂರ್ಣ ಹೆಸರು | |
| 2 | ಲಿಂಗ (ಗಂಡು / ಹೆಣ್ಣು) | |
| 3 | ಜನ್ಮ ದಿನಾಂಕ<br>(ದೃಢೀಕೃತ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು) | |
| 4 | ವಿದ್ಯಾರ್ಹತೆ<br>(ದೃಢೀಕೃತ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು) | |
| 5 | ಮೊಬೈಲ್ ಸಂಖ್ಯೆ | |
| 6 | ತಾಯಿಯ ಹೆಸರು | |
| 7 | ತಂದೆಯ ಹೆಸರು | |
| 8 | ಪೂರ್ಣ ವಿಳಾಸ | |
| 9 | ಪಿನ್ ಕೋಡ್ ಸಂಖ್ಯೆ | |
| 10 | ಸ್ವಂತ ಜಿಲ್ಲೆ | |
| 11 | ಅನುಯಾಯಿ ಹುದ್ದೆಗೆ ನೇಮಕಾತಿ ಹೊಂದಲು ಇಚ್ಛಿಸಿರುವ ವೃತ್ತಿ (Trade) | |
| 12 | ಮೀಸಲಾತಿ ಕೋರುವ ಪ್ರವರ್ಗ<br>(ದೃಢೀಕೃತ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು) | |
| 13 | ಉಪ ಜಾತಿ | |
| 14 | ಗ್ರಾಮೀಣ ಅಭ್ಯರ್ಥಿಯೇ<br>(ದೃಢೀಕೃತ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು) | |
| 15 | ಮಹಿಳಾ ಅಭ್ಯರ್ಥಿಯೇ | |
| 16 | ಸರ್ಕಾರಿ ನೌಕರರೇ<br>(ಆಗಿದ್ದಲ್ಲಿ ವಿವರ ನೀಡುವುದು) | |
| 17 | ಅಪರಾಧ ಪ್ರಕರಣದಲ್ಲಿ ಭಾಗಿಯಾಗಿದ್ದೀರಾ/ ಅಪರಾಧ ಮೊಕದ್ದಮೆಯಲ್ಲಿ ಶಿಕ್ಷೆಗೆ ಒಳಪಟ್ಟಿರುವಿರಾ | |
| 18 | ಬ್ಯಾಂಕ್ ಡಿ.ಡಿ ಸಂಖ್ಯೆ, ದಿನಾಂಕ ಮತ್ತು ಪಾವತಿಸಿದ ಮೊತ್ತದ ವಿವರ | |

**ಅಭ್ಯರ್ಥಿಯ ಸಹಿ**

**ಘೋಷಣೆ**

1. ಅರ್ಜಿಯಲ್ಲಿ ತಿಳಿಸಿರುವ ವಿವರಗಳು ನನಗೆ ತಿಳಿದ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ನಿಜವೆಂದು, ಪೂರ್ಣವೆಂದು ಮತ್ತು ಸರಿಯಿದೆಯೆಂದು ಈ ಮೂಲಕ ಘೋಷಿಸುತ್ತೇನೆ. ನಾನು ನೀಡಲಾದ ಯಾವುದೇ ಮಾಹಿತಿಯು ಪರೀಕ್ಷೆ/ ನೇಮಕಾತಿ ಮುಂಚೆ, ನಡೆಯುವಾಗ ಅಥವಾ ತರುವಾಯ ಸುಳ್ಳು/ತಪ್ಪೆಂದು ಕಂಡುಬಂದ ಸಂದರ್ಭದಲ್ಲಿ ಅಥವಾ ಅನರ್ಹತೆ ಪತ್ತೆಯಾದ ಸಂದರ್ಭದಲ್ಲಿ ನೇಮಕಾತಿ ಸಮಿತಿಯು ನನ್ನ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಬಹುದೆಂದು ನನಗೆ ತಿಳಿದಿರುತ್ತದೆ.
2. ನಾನು ಅಧಿಸೂಚನೆಯಲ್ಲಿ ನಮೂದಿಸಿರುವ ನಿಯಮ ಮತ್ತು ವಿನಿಮಯಗಳನ್ನು ಹಾಗೂ ಎಲ್ಲಾ ಷರತ್ತುಗಳನ್ನು ಜಾಗರೂಕತೆಯಿಂದ ಓದಿರುತ್ತೇನೆ ಮತ್ತು ಅವುಗಳಿಗೆ ಬದ್ಧನಾಗಿದ್ದು, ಕಟ್ಟುನಿಟ್ಟಾಗಿ ಪಾಲಿಸುತ್ತೇನೆಂದು ಘೋಷಿರುತ್ತೇನೆ. ನಾನು ಅರ್ಜಿ ಸಲ್ಲಿಸಿದ ಹುದ್ದೆಯ ನೇಮಕಾತಿ ನಿಗದಿಪಡಿಸಿದ ವಯೋಮಿತಿ, ವಿದ್ಯಾರ್ಹತೆ ಮುಂತಾದ ಇತರೆ ಎಲ್ಲಾ ಅರ್ಹತಾ ಷರತ್ತುಗಳನ್ನು ಪೂರೈಸಿರುತ್ತೇನೆ. ನಾನು ಈ ಪ್ರಕ್ರಿಯೆಯಲ್ಲಿ ಹಾಜರಾಗಲು ಈ ಹಿಂದೆ ಉಚ್ಛಾಟಿಸಲ್ಪಟ್ಟಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.
3. ನಾನು ಈ ಹುದ್ದೆಯ ಆಯ್ಕೆಯ ಸಲುವಾಗಿ ಅರ್ಜಿ ಸಲ್ಲಿಸುತ್ತಿರುವುದು ಈ ಹುದ್ದೆಯ ನಿಯಮ ಮತ್ತು ವಿನಿಮಯಗಳನ್ನು ಒಪ್ಪಿಕೊಂಡಂತೆ ಆಗಿರುತ್ತದೆಂದು ನನಗೆ ಸಂಪೂರ್ಣವಾಗಿ ತಿಳಿದಿರುತ್ತದೆ. ನೇಮಕಾತಿ ಪ್ರಕ್ರಿಯೆಯಲ್ಲಿ ಪಾಲ್ಗೊಂಡು ಆಯ್ಕೆಯಾಗದಿದ್ದಲ್ಲಿ, ಪಾಲ್ಗೊಂಡಿರುವ ಈ ನೇಮಕಾತಿ ನಿಯಮ ಮತ್ತು ವಿನಿಮಯಗಳನ್ನು ಪ್ರಶ್ನಿಸುವುದಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

**ದಿನಾಂಕ:** **ಅಭ್ಯರ್ಥಿಯ ಸಹಿ**

**ನಮೂನೆ–1**

**ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ತರಕ್ಕೆ ಸೇರಿಲ್ಲವೆಂದು, ದೃಢೀಕರಿಸಿ ಗ್ರಾಮೀಣ ಮೀಸಲಾತಿಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ**

***(ಜನರಲ್ ಮೆರಿಟ್ ಅಭ್ಯರ್ಥಿಗಳು ಭರ್ತಿ ಮಾಡಬೇಕಾದ ನಮೂನೆ)***

ಇವರಿಗೆ:

ತಹಶೀಲ್ದಾರರು,

..................... ತಾಲ್ಲೂಕು,

..................... ಜಿಲ್ಲೆ.

ಮಾನ್ಯರೆ,

ಶ್ರೀ / ಶ್ರೀಮತಿ ....................................................... ಎಂಬುವವರ ಮಗ/ಮಗಳು/ಪತಿ/ಪತ್ನಿ....................................... ಆದ ನಾನು ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿ ಮೀಸಲಾತಿಯನ್ನು ಪಡೆಯುವುದಕ್ಕಾಗಿ ಪ್ರಮಾಣ ಪತ್ರವನ್ನು ಪಡೆಯಲು ತಮ್ಮಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುತ್ತಾ ಕೋರುತ್ತೇನೆ.

1. ಅಭ್ಯರ್ಥಿಯ ಹೆಸರು ಮತ್ತು ಉದ್ಯೋಗ :
2. ಅಭ್ಯರ್ಥಿಯ ಸ್ವಂತ ಸ್ಥಳ ಗ್ರಾಮ :

   ತಾಲ್ಲೂಕು :

   ಜಿಲ್ಲೆ :
3. ಅಭ್ಯರ್ಥಿಯು ಹುಟ್ಟಿದ ದಿನಾಂಕ ವಯಸ್ಸು ಮತ್ತು ಹುಟ್ಟಿದ ಸ್ಥಳ :
4. ಅಭ್ಯರ್ಥಿಯ ತಂದೆ/ತಾಯಿ/ಪೋಷಕರ ಪತಿಯ/ಪತ್ನಿಯ ಹೆಸರು ಮತ್ತು ಉದ್ಯೋಗ:

   (ಉದ್ಯೋಗವು ಸರ್ಕಾರಿ/ಅರೆ ಸರ್ಕಾರಿ/ಸಾರ್ವಜನಿಕ ಉದ್ಯಮ/ಖಾಸಗಿ)
5. ಅಭ್ಯರ್ಥಿಯ ಪ್ರಸ್ತುತ ವಿಳಾಸ :

   (ಸ್ಪಷ್ಟವಾಗಿ ನಮೂದಿಸುವುದು)
6. ಅಭ್ಯರ್ಥಿಯ ಖಾಯಂ ವಿಳಾಸ :
7. ಅಭ್ಯರ್ಥಿಯ ಶಾಲಾ ಶಿಕ್ಷಣದ ವ್ಯಾಸಂಗ ಮಾಡಿದ ಶಾಲೆಗಳ ವಿವರಗಳು

   ಪ್ರಾಥಮಿಕ

   ಮಾಧ್ಯಮಿಕ

   ಪ್ರೌಢ
8. ಅಭ್ಯರ್ಥಿಯ ಹಾಗೂ ಅಭ್ಯರ್ಥಿಯ ತಂದೆ/ತಾಯಿ/ಪೋಷಕರ (ತಂದೆ/ತಾಯಿ ಜೀವಂತವಿಲ್ಲದಿದ್ದರೆ) ಇವರ ಒಟ್ಟು ವಾರ್ಷಿಕ ಆದಾಯ ಎಲ್ಲಾ ಮೂಲಗಳಿಂದ :

   1) ವೇತನ ಶ್ರೇಣಿ

   2) ಜಮೀನಿನ ವಿವರ

   3) ಇತರ ಮೂಲಗಳು
9. ಆದಾಯ ತೆರಿಗೆ ಪಾವತಿದಾರರೇ ?
10. ಸಂಪತ್ತು ತೆರಿಗೆ ಪಾವತಿದಾರರೇ ?
11. ಮಾರಾಟ ತೆರಿಗೆ ಪಾವತಿದಾರರೇ ?

**(ಪ್ರವರ್ಗ – 2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಎಫ್**

**(ನಿಯಮ 3ಎ (2) (3)ನ್ನು ನೋಡಿ)**

**ಹಿಂದುಳಿದ ವರ್ಗಗಳಿಗೆ (2ಎ, 2ಬಿ, 3ಎ, 3ಬಿ) ಸೇರಿದ ಅಭ್ಯರ್ಥಿಗಳಿಗೆ ನೀಡುವ ಆದಾಯ ಮತ್ತು ಜಾತಿ ಪ್ರಮಾಣ ಪತ್ರ**

.................................................................. ರಲ್ಲಿ ವಾಸವಾಗಿರುವ ಶ್ರೀ / ಶ್ರೀಮತಿ ................................................ ಇವರ ಮಗ / ಮಗಳು / ಪತಿ / ಪತ್ನಿಯಾದ ಶ್ರೀ/ಶ್ರೀಮತಿ/ಕುಮಾರಿ ........................................ ಇವರು ಮತ್ತು ಆತನ / ಅವಳ ತಂದೆ / ತಾಯಿ / ಪೋಷಕರು/ಪತ್ನಿ/ಪತಿಯು, ಸರ್ಕಾರಿ ಆದೇಶಗಳ ಸಂಖ್ಯೆ. ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರಲ್ಲಿ ನಿರ್ದಿಷ್ಟ ಪಡಿಸಿದ ಮೇಲುಸ್ತರದ (ಕ್ರಿಮಿ ಲೇಯರ್) ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ;

ಅಭ್ಯರ್ಥಿಯಾಗಲಿ ಅಥವಾ ಆತನ / ಆಕೆಯ ತಂದೆ ತಾಯಿ/ಪೋಷಕರಾಗಲಿ / ಪತ್ನಿ / ಪತಿಯಾಗಲಿ, ಸರ್ಕಾರದ ಸೇವೆಯಲ್ಲಿ 1ನೇ ದರ್ಜೆಯ ಅಥವಾ 2ನೇ ದರ್ಜೆಯ ಅಧಿಕಾರಿಯಾಗಿಲ್ಲವೆಂದು ;

ಅಥವಾ

ಸಾರ್ವಜನಿಕ ವಲಯ ಉದ್ಯಮದಲ್ಲಿ ತತ್ಸಮಾನವಾದ ಹುದ್ದೆಯನ್ನು ಹೊಂದಿರುವುದಿಲ್ಲ ;

ಅಥವಾ

ಖಾಸಗಿ ನಿಯೋಜಕರ ಕೈಕೆಳಗೆ, 2ನೇ ದರ್ಜೆಯ ಅಧಿಕಾರಿಯ ಸಂಬಳಕ್ಕಿಂತ (ವೇತನ ಶ್ರೇಣಿ ₹. 11400–21600/– ಪ್ರಾರಂಭಿಕ ಹಂತ) ಕಡಿಮೆಯಲ್ಲದ ಸಂಬಳವನ್ನು ಪಡೆಯುವ ನೌಕರನಾಗಿಲ್ಲವೆಂದು

ಅಥವಾ

ಆತನ/ಆಕೆಯ ತಂದೆ ತಾಯಿ/ಪೋಷಕರು/ಪತ್ನಿ/ಪತಿಯ ಆದಾಯವು ಎರಡು ಲಕ್ಷ ಮೀರುವುದಿಲ್ಲವೆಂದು ;

ಅಥವಾ

ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರಲ್ಲಿ ನಿಗಧಿಪಡಿಸಿರುವಂತೆ ಆತನ/ಆಕೆಯ ತಂದೆ ತಾಯಿ/ಪೋಷಕರು/ಪತ್ನಿ/ಪತಿಯು ಮಾರಾಟ ತೆರಿಗೆದಾರನಲ್ಲ ಅಥವಾ ಆತನ/ಆಕೆಯ ತಂದೆ ತಾಯಿ/ಪೋಷಕ/ಪತ್ನಿ/ಪತಿಯು ಅಥವಾ ಇವರಿಬ್ಬರೂ 10 ಯುನಿಟ್‌ಗಿಂತ ಹೆಚ್ಚಿನ ಕೃಷಿ ಭೂಮಿ ಅಥವಾ 25 ಎಕರೆಗಳಿಗಿಂತ ಹೆಚ್ಚಿನ ಪ್ಲಾಂಟೇಶನ್ ಭೂಮಿಯನ್ನು ಹೊಂದಿರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರ ಅನ್ವಯ ಶ್ರೀ/ಶ್ರೀಮತಿ/ಕುಮಾರಿ ..................................ಇವರು ...................................... ಜಾತಿಗೆ ......................................... ಸೇರಿದ ಉಪಜಾತಿಯವರಾಗಿದ್ದು ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರ ಅನ್ವಯ ಹಿಂದುಳಿದ ವರ್ಗಗಳ ಪ್ರವರ್ಗ ............................... (2ಎ, 2ಬಿ, 3ಎ, 3ಬಿ) ಸೇರಿರುತ್ತಾರೆ.

ಸ್ಥಳ : ತಹಶೀಲ್ದಾರರು

ದಿನಾಂಕ : ............................ ತಾಲ್ಲೂಕು

ಕಛೇರಿಯ ಮೊಹರು

**(ಪ್ರವರ್ಗ – 1ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಇ**

**(ನಿಯಮ 3ಎ (2) (3) ನೋಡಿ)**

**ಹಿಂದುಳಿದ ವರ್ಗಗಳಿಗೆ (ಪ್ರವರ್ಗ–1) ಸೇರಿದ ಅಭ್ಯರ್ಥಿಗೆ ನೀಡುವ ಪ್ರಮಾಣ ಪತ್ರ**

................................................................................................. ...................................... ಗ್ರಾಮ / ಪಟ್ಟಣದ / ನಗರ ನಿವಾಸಿಯಾದ ಶ್ರೀ / ಶ್ರೀಮತಿ ...................................................................................................... ಇವರ ಮಗ / ಮಗಳು / ಪತ್ನಿ / ಪತಿಯಾದ ಶ್ರೀ / ಶ್ರೀಮತಿ .............................................................................................. ಇವರು ಹಿಂದುಳಿದ ವರ್ಗಗಳ (ಪ್ರವರ್ಗ) ..................................................... ಜಾತಿಯ ...........................................ಉಪ ಜಾತಿಗೆ ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರರು

ದಿನಾಂಕ : ............................ ತಾಲ್ಲೂಕು

........................ ಕಛೇರಿಯ ಮೊಹರು

**(ಪ.ಜಾ/ಪ.ಪಂ ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಡಿ**

**(ನಿಯಮ 3ಎ (2) (3) ನೋಡಿ)**

**ಅನುಸೂಚಿತ ಜಾತಿ ಅಥವಾ ಅನುಸೂಚಿತ ಬುಡಕಟ್ಟುಗಳಿಗೆ (ಪ.ಜಾ /ಪ.ಪಂ) ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರಗಳ ನಮೂನೆ**

**ಪ್ರಮಾಣ ಪತ್ರ**

........................................................... ರಾಜ್ಯದ / ಕೇಂದ್ರಾಡಳಿತ ಪ್ರದೇಶದ * ............................ ಜಿಲ್ಲೆಯ/ ವಿಭಾಗದ ........................................... ಗ್ರಾಮ / ಪಟ್ಟಣದ * ನಿವಾಸಿಯಾದ ಶ್ರೀ / ಶ್ರೀಮತಿ ............... ಎಂಬುವವರ ಮಗ / ಮಗಳಾದ ಶ್ರೀ / ಶ್ರೀಮತಿ ............................................... ಇವರು ಅನುಸೂಚಿತ ಜಾತಿ / ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವ ಜಾತಿ / ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

* ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950
* ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) ಆದೇಶ, 1950
* ಸಂವಿಧಾನ (ಅನುಸೂಚಿತ ಜಾತಿ) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1950

* ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1951

(ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956, ಮುಂಬಯಿ ರಾಜ್ಯ ಪುನರ್ ರಚನಾ ಅಧಿನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅಧಿನಿಯಮ, 1966, ಹಿಮಾಚಲ ಪ್ರದೇಶ ರಾಜ್ಯ ಅಧಿನಿಯಮ, 1970 ಮತ್ತು ಈಶಾನ್ಯ ಪ್ರದೇಶಗಳ (ಪುನರ್ ರಚನಾ ಅಧಿನಿಯಮ, 1971ರ ಮೂಲಕ ತಿದ್ದುಪಡಿಯಾದಂತೆ).

* ಸಂವಿಧಾನ
* ಸಂವಿಧಾನ (ಜಮ್ಮು ಮತ್ತು ಕಾಶ್ಮೀರ) ಅನುಸೂಚಿತ ಜಾತಿಗಳ ಆದೇಶ, 1956
* ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅಧಿನಿಯಮ, 1976ರ ಮೂಲಕ ತಿದ್ದುಪಡಿಯಾದಂತೆ ಸಂವಿಧಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟುಗಳ ಆದೇಶ, 1959.
* ಸಂವಿಧಾನ (ದಾದರ್ ಮತ್ತು ನಗರ ಹವೇಲಿ) ಅನುಸೂಚಿತ ಜಾತಿಗಳ ಆದೇಶ, 1962
* ಸಂವಿಧಾನ (ಪಾಂಡಿಚೇರಿ) ಅನುಸೂಚಿತ ಜಾತಿಗಳ ಆದೇಶ, 1964
* ಸಂವಿಧಾನ (ಅನುಸೂಚಿತ ಬುಡಕಟ್ಟುಗಳ) (ಉತ್ತರ ಪ್ರದೇಶ) ಆದೇಶ, 1967
* ಸಂವಿಧಾನ (ಗೋವಾ, ದಮನ್ ಮತ್ತು ದೀವ್) ಅನುಸೂಚಿತ ಜಾತಿ / ಬುಡಕಟ್ಟುಗಳ ಆದೇಶ 1988
* ಸಂವಿಧಾನ (ನಾಗಾಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ

2. ಶ್ರೀ / ಶ್ರೀಮತಿ / ಕುಮಾರಿ* .................................................................................................................. ಮತ್ತು / ಅಥವಾ ಅವನ* / ಅವಳ* ಕುಟುಂಬವು ........................................................................................ ರಾಜ್ಯ / ಕೇಂದ್ರಾಡಳಿತ ಪ್ರದೇಶದ ................................................ ಜಿಲ್ಲಾ / ವಿಭಾಗದ ........................... ಗ್ರಾಮ / ಪಟ್ಟಣದ ಸಾಮಾನ್ಯ ನಿವಾಸಿ (ಗಳು)

ಸಹಿ ..................................................

ತಹಶೀಲ್ದಾರರು ..................................................

ಸ್ಥಳ : ಕಛೇರಿಯ ಮೊಹರಿನೊಂದಿಗೆ

ದಿನಾಂಕ : ಪದನಾಮ

**ರಾಜ್ಯ / ಕೇಂದ್ರಾಡಳಿತ ಪ್ರದೇಶ***

**ಅನ್ವಯವಾಗದಿರುವ ಪದಗಳನ್ನು ದಯವಿಟ್ಟು ಬಿಟ್ಟು ಬಿಡಿ / ಹೊಡೆದು ಹಾಕಿ**

**ಸೂಚನೆ :** ಇಲ್ಲಿ ಉಪಯೋಗಿಸಿದ **"ಸಾಮಾನ್ಯ ನಿವಾಸಿಗಳೂ"** ಎಂಬ ಪದಾವಳಿಯು ಪ್ರಜಾ ಪ್ರಾತಿನಿಧ್ಯ ಅಧಿನಿಯಮ, 1950ರ 20ನೇ ಪ್ರಕರಣದಲ್ಲಿರುವ ಅರ್ಥವನ್ನೇ ಹೊಂದಿರುತ್ತದೆ.

ಭಾರತ ಸರ್ಕಾರದ ಪತ್ರ ಸಂಖ್ಯೆ. ಬಿಸಿ 12028 / 2/ 76–ಎಸ್‌ಸಿಟಿ–1 ಗೃಹ ಮಂತ್ರಾಲಯದ ಅನುಸಾರವಾಗಿ, ಅಂಥ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮವಾಗಿರುವುದಕ್ಕಾಗಿ, ಭಾರತ ಸರ್ಕಾರದ (ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ) ಪತ್ರ ಸಂಖ್ಯೆ 13.02.74 ಇಎಸ್‌ಟಿ (ಎಸ್‌ಸಿಟಿ) ದಿನಾಂಕ 5ನೇ ಆಗಸ್ಟ್ 1975ರಲ್ಲಿ ನಮೂದಿಸಿದ ಪ್ರಾಧಿಕಾರಿಯು, ರಾಷ್ಟ್ರಪತಿಗಳು ಸಂಬಂಧಪಟ್ಟ ಆದೇಶದ ಅಧಿಸೂಚನೆಯನ್ನು ಹೊರಡಿಸಿದ ಸಮಯದಲ್ಲಿ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ವ್ಯಕ್ತಿಯು, ತನ್ನ ಖಾಯಂ ವಾಸ ಸ್ಥಳವನ್ನು ಹೊಂದಿದ್ದ ಸ್ಥಳಕ್ಕೆ ಸೇರಿದವರೊಬ್ಬರಾಗಿರತಕ್ಕದ್ದು. ಅದೇ ರೀತಿಯಲ್ಲಿ, ಒಂದು ತಾಲ್ಲೂಕಿನ ರೆವಿನ್ಯೂ ಪ್ರಾಧಿಕಾರಿಯು ಇನ್ನೊಂದು ತಾಲ್ಲೂಕಿಗೆ ಸೇರಿದ ವ್ಯಕ್ತಿಗಳಿಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರಿಯಾಗುವುದಿಲ್ಲ.

**ನಮೂನೆ – 2**

**ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ ..........................................................................ರವರ ಮಗ/ಮಗಳು/ಪತ್ನಿ/ಶ್ರೀ/ಶ್ರೀಮತಿ/ಕುಮಾರಿ ................................................ ಜಿಲ್ಲೆ ............................ ತಾಲ್ಲೂಕು ............................ ಗ್ರಾಮದಲ್ಲಿ ......................... ವಾಸವಾಗಿರುವ ಇವರು ಒಂದನೇ ತರಗತಿಯಿಂದ ................................ ತರಗತಿಯವರೆಗೆ ...................................... ಜಿಲ್ಲೆ .................................ತಾಲ್ಲೂಕು .............................. ಪಟ್ಟಣ ................................................ ಶಾಲೆಯಲ್ಲಿ ವ್ಯಾಸಂಗ ಮಾಡಿ ................................. ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು ಅಭ್ಯರ್ಥಿಯು ವ್ಯಾಸಂಗ ಮಾಡಿದ ಅವಧಿಯಲ್ಲಿ ಕರ್ನಾಟಕದ ಪೌರ ನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟ ಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

ಸ್ಥಳ : ಮುಖ್ಯೋಪಾಧ್ಯಾಯರ ಸಹಿ

ದಿನಾಂಕ : ಮತ್ತು ಸಂಸ್ಥೆಯ ಪೂರ್ಣ ವಿಳಾಸವುಳ್ಳ ಮೊಹರು

ಮೇಲುರುಜು

ಕ್ಷೇತ್ರ ಶಿಕ್ಷಣಾಧಿಕಾರಿ

**ಪ್ರಮಾಣೀಕೃತ ಘೋಷಣೆ**

ಈ ಮೇಲೆ ನನ್ನಿಂದ ಒದಗಿಸಿದ ಮಾಹಿತಿ/ವಿವರಣೆಯು ನಾನು ತಿಳಿದಿರುವಷ್ಟರ ಮಟ್ಟಿಗೆ ಸತ್ಯವೆಂದು ಶ್ರದ್ಧಾಪೂರ್ವಕವಾಗಿ ದೃಢೀಕರಿಸುತ್ತೇನೆ ಮತ್ತು ಘೋಷಿಸುತ್ತೇನೆ.

ಸ್ಥಳ : ತಮ್ಮ ವಿಧೇಯ

ದಿನಾಂಕ : (ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತಾ ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗಿರುತ್ತೇನೆ.

ಸ್ಥಳ : ತಂದೆ/ತಾಯಿ/ಪೋಷಕರ ಸಹಿ

ದಿನಾಂಕ : (ತಂದೆ/ತಾಯಿ ಜೀವಂತವಿಲ್ಲದಿದ್ದರೆ)

(ಹೆಂಡತಿ/ಗಂಡ/ಇವರ ಸಹಿ)

**ಸ್ಥಳೀಯ ಇಬ್ಬರು ಸಾಕ್ಷಿದಾರರು**

ಅಭ್ಯರ್ಥಿಯ ಮತ್ತು ಅವರ ತಂದೆ/ತಾಯಿ/ಪೋಷಕರು/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ಗುರುತಿಸುತ್ತೇವೆ.

ಸಾಕ್ಷಿದಾರರ ಸಹಿ 1)

(ಪೂರ್ಣ ವಿಳಾಸದೊಂದಿಗೆ) 2)

**ಪರಿಶೀಲನಾ ಪ್ರಮಾಣ ಪತ್ರ**

1. ಶ್ರೀ/ಶ್ರೀಮತಿ........................................................................... ಎಂಬುವವರ ಮಗ/ಮಗಳು/ಪತಿ/ಪತ್ನಿ/ಶ್ರೀ/ ಶ್ರೀಮತಿ/ಕುಮಾರಿ................................ ಎಂಬುವವರು ಕರ್ನಾಟಕ ರಾಜ್ಯದ ................................. ಜಿಲ್ಲೆಯ ವಿಭಾಗ ............................ ಗ್ರಾಮ/ಪಟ್ಟಣ/ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆ ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2. ಶ್ರೀ/ಶ್ರೀಮತಿ/ಕುಮಾರಿ ......................................................... ಇವರ ತಂದೆ/ತಾಯಿ/ಪೋಷಕರು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ 31.01.1995 ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರರು

ದಿನಾಂಕ : ......................... ತಾಲ್ಲೂಕು

ಕಛೇರಿಯ ಮೊಹರು

**ಸೂಚನೆ–1**: ಇದರಲ್ಲಿ ಉಪಯೋಗಿಸಲಾದ **"**ಸಾಮಾನ್ಯ ನಿವಾಸಿ**"** ಎಂಬ ಪದವು 1950ರ ಜನತಾ ಪ್ರಾತಿನಿಧ್ಯ ಕಾಯ್ದೆಯ 20ನೇ ಅನುಚ್ಛೇದದಲ್ಲಿನ ಅರ್ಥವನ್ನು ಹೊಂದಿರುತ್ತದೆ.

**ಸೂಚನೆ–2**: ಪರಿಶೀಲನಾ ಪ್ರಮಾಣ ಪತ್ರ ನೀಡುವ ಅಧಿಕೃತ ಅಧಿಕಾರಿಯು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ 31.01.1995 ರನ್ವಯ ಮೇಲುಸ್ತರ (Creamy Layer) ದವರನ್ನು ಗುರುತಿಸಲು ನಿಗದಿಪಡಿಸಲಾಗಿರುವ ಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ಪ್ರಮಾಣ ಪತ್ರ ನೀಡತಕ್ಕದ್ದು.

**ಪ್ರಾಂಶುಪಾಲರು,**
**ಸಶಸ್ತ್ರ ಪೊಲೀಸ್ ತರಬೇತಿ ಶಾಲೆ,**
**ಯಲಹಂಕ, ಬೆಂಗಳೂರು–63**

**PR-183**
**SC-10**

## KARNATAKA STATE ADMINISTRATIVE TRIBUNAL

**6th and 7th Floor, Kandaya Bhavan, K.G.Road, Bengaluru – 09**

**NOTIFICATION**

**No.KAT/EST(1)/REC-DRV/65/2015, Dated: 05-10-2016.**

Whereas a Provisional Select List for appointment to the posts of Drivers in K.S.A.T., was prepared and published by issuing Notification bearing No.KAT/EST(1)/REC-DRV/65/2015, dated:22-09-2016, inviting the objections/representations, if any, from the affected persons within 7 days from the date of publication.

Whereas no one has filed any objection/representation to the said provisional selection list of Drivers, except one of the candidate, whose objections/representation have been considered in detail and after such consideration a suitable endorsement is issued separately rejecting his objections.

In the circumstances, the names of the candidates who are selected for appointment to the posts of Drivers in Karnataka State Administrative Tribunal are hereby notified finally in the order of merit as mentioned below:-

| Sl. No. | Name and address of the candidate | Category |
|---|---|---|
| 1. | Ramu V. S/o Varadaraju, No.40, 3rd 'B' Main, 1st Main, Gollarahatti, Vyalikaval, Near Police Station, Bengaluru-560003. | 2A (Others) |
| 2. | Mayannagowda B.N. S/o Narasimhegowda, Bettadakote Village, Bilagunda Post, Beluru Hobli, Nagamangala Taluk, Mandya District. | General Merit (Rural) |

**BY ORDER OF HON'BLE THE CHAIRMAN**

Registrar
Karnataka State Administrative Tribunal
Bengaluru-09

**PR. 185**
**SC - 10**

## IN THE COURT OF LXVIITH ADDL. CITY CIVIL & SESSION, MAYO HALL AT BENGALURU.

## P& SC NO. 25046/2016

**BETEEN:**

**PETITIONERS**

1. MASOOD ALI KHAN
S/O. LATE.MOHAMMED SANAULLA KHAN
AGED ABOUT 28 YEARS

2. SMT.SAYEEDUNNISSA
W/O.LATE.MOHAMMED SANAULLA KHAN
AGED ABOUT 63 YEARS

3. SMT.GULZAR KHAN
D/O. LATE.MOHAMMED SANAULLA KHAN
AGED ABOUT 40 YEARS
ALL ARE RESIDING AT
18/1, 2nd Cross, Appaiah Garden,
Jogupalya Ulsoor, Bengaluru-560008.

**Vs RESPONDENT** **NIL**

**PUBLIC NOTICE**

Notice is hereby given that a petition has been made to this Court under Section 372 of the Indian Succession Act, 1925 (Act No.39 of 1925) for grant of Succession Certificate in favour of the 1st Petitioner Sri.Masood Ali Khan in respect of the petition Schedule property mentioned below of deceased Mohammed Sanaulla Khan Proprietor M/s. Ganga Scientific Works who died intestate on 14.1.2015.

Be it known that no caveat has been entered and the said petition is for hearing on 15.12.16 at 11.00 a.m. Persons claiming to have any interest may come and see the proceedings before the grant of succession certificate in favour of 1st petitioner sri.Masood Ali Khan.

**SCHEDULE PROPERTY**

M/s. Ganga Scientific Works Proprietor, Mohammed Sanaulla Khan situated at No.51/12 (7-A) 1st Floor, M.T.B Road, Armugam Modaliar Road, Kalasipalyam, Bengaluru -560002, has been registered as a dealer under section 22 of Karnataka value added Tax 2003 TIN no 29760112405 with Asst. Commissioner of Commercial Tax LVO 110, Chamrajpet, Bengaluru -18. The said dealer is also registered Under CST Act 1956, effective from 1.4.2005.

Given under my hand and seal of this Court on this 10th day of November 2016.

**PD-64**
**SC-05**

**BY ORDER OF THE COURT**
**Assistant Registrar,**
**City Civil Court, Mayo Hall, Bengaluru.**

## FORM - I

**(See Rule 09)**

**OFFICE OF THE DEPUTY DIRECTOR OF PUBLIC INSTRUCTIONS VIJAYAPUR.**

**NOTIFICATION Dated : 27-10-2016.**

**Shri. CHANNAPPA S/o SOMAPPA CHILKARAGI** working as Assistant Teacher in the Education Department of Office of the Government Higher Primary School, Bilebhavi is permitted to change his name to **CHANDRASHEKHAR SOMAPPA SIDARADDI.**

**PD C/N-80** **DEPUTY DIRECTOR OF PUBLIC INSTRUCTIONS**
**SC - 10** **VIJAYAPUR.**

## FORM - I

**(See Rule 09)**

**OFFICE OF THE B.E.O. BILAGI. DIST. BAGALKOT.**

**NOTIFICATION Dated : 17-10-2016.**

**Shri. BASAVANT LAMANI** working as BRP in the Education Department of Office of the B.E.O., Bilagi is permitted to change his name to **BASAVARAJ RATHOD.**

**PD C/N-81** **BLOCK EDUCATION OFFICER**
**SC - 10** **BILAGI,**

## FORM - I

**(See Rule 09)**

**OFFICE OF THE DEPUTY DIRECTOR OF PUBLIC INSTRUCTIONS BAGALKOT.**

**NOTIFICATION Dated : 19-10-2016.**

**Shri. SANGAPPA SANNATANGI** working as BRP in the Education Department of Office of the B.R.C., Bagalkot is permitted to change his name to **SANGAMESH SANNATANGI.**

**PD C/N-82** **DEPUTY DIRECTOR OF PUBLIC INSTRUCTIONS**
**SC - 10** **BAGALKOT.**

## FORM - I

**(See Rule 09)**

**OFFICE OF THE DEPUTY DIRECTOR OF PUBLIC INSTRUCTIONS BAGALKOT.**

**NOTIFICATION Dated : 17-10-2016.**

**Shri. KISAN LAMANI** working as Assistant Teacher in the Education Department of Office of the B.E.O., Bilagi is permitted to change his name to **KISHAN CHAVAN.**

**PD C/N-83** **DEPUTY DIRECTOR OF PUBLIC INSTRUCTIONS**
**SC - 10** **BAGALKOT.**

## FORM - I

**(See Rule 09)**

**OFFICE OF THE DEPUTY DIRECTOR OF PUBLIC INSTRUCTIONS BAGALKOT.**

**NOTIFICATION Dated : 19-10-2016.**

**Shri. MAHANTESH LAMANI** working as Assistant Teacher in the Education Department of Office of the G.H.S., Badagi is permitted to change his name to **MAHANTESH CHAVAN.**

**PD C/N-84** **DEPUTY DIRECTOR OF PUBLIC INSTRUCTIONS**
**SC - 10** **BAGALKOT.**

## FORM - I

**(See Rule 09)**

**OFFICE OF THE DISTRICT HEALTH AND FAMILY WELFARE OFFICER, RAICHUR**

**NOTIFICATION Dated : 05-10-2016.**

**Shri. V. BABURAO** working as Peon in the Health and Family Welfare Department of Office of the District Health and Family Welfare Officer, Raichur is permitted to change his name to **M. BABUMIYA.**

**PD C/N-85** **DISTRICT HEALTH AND FAMILY WELFARE OFFICER,**
**SC - 10** **RAICHUR.**

**FORM-IV**

**(See Rule 12)**

**NOTICE Dated : 03-09-2016**

It is hereby notified that the undersigned has changed her name from **BHAVANA S GAWARI** to **BHAVANA R MAALE.**

**PD C/N-86** **BHAVANA S GAWARI**

**SC - 10**

**FORM-IV**

**(See Rule 12)**

**NOTICE Dated : 16-09-2016**

It is hereby notified that the undersigned has changed his name from **MARUTHI. FAKKIRAPPA. WADDAR** to **MARUTHI. FAKKIRAPPA. ANDALAGI.**

**PD C/N-87** **MARUTHI FAKKIRAPPA WADDAR**

**SC - 10**

**FORM-IV**

**(See Rule 12)**

**NOTICE Dated : 28-09-2016**

It is hereby notified that the undersigned has changed his name from **M. RAVINDRA KUMAR** to **M RAFI.**

**PD C/N-88** **M. RAVINDRA KUMAR**

**SC - 10**

**FORM - I**

**(See Rule 09)**

**OFFICE OF THE DEPUTY DIRECTOR OF PUBLIC INSTRUCTIONS, VIJAYAPUR.**

**NOTIFICATION Dated : 27-10-2016.**

**Shri. IRAYYA S/o AMBRAYYA MATH** working as Assistant Master in the Education Department of Government Higher Primary School, Nebageri Taluk Muddebihal is permitted to change his name to **IRAYYA AMARAYYA HIREMATH.**

**PD C/N-89** **DEPUTY DIRECTOR OF PUBLIC INSTRUCTIONS,**

**SC - 10** **VIJAYAPUR.**

**FORM-IV**

**(See Rule 12)**

**NOTICE Dated : 03-10-2016**

It is hereby notified that the undersigned has changed his name from **B.A. GANJIHAL** to **BASAVARAJ TULASIGERAPPA MOKHASHI.**

**PD C/N-90** **B.A. GANJIHAL**

**SC - 10**

**FORM-IV**

**(See Rule 12)**

**NOTICE Dated : 25-10-2016**

It is hereby notified that the undersigned has changed her name from **Smt. BASAMMA H DODDAGOUDAR** to **Smt. SUDHA VIKRAM KULKARNI.**

**PD C/N-91** **BASAMMA H DODDAGOUDAR**

**SC - 10**

## ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–01.

### ಅಧಿಸೂಚನೆ

**ಸಂಖ್ಯೆ: ಆರ್(3)45/2016–17/ಪಿಎಸ್‌ಸಿ, ದಿನಾಂಕ: 16–11–2016.**

**1.** ಕರ್ನಾಟಕ ನಾಗರಿಕ ಸೇವಾ (ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ನೇಮಕಾತಿ) ನಿಯಮಗಳು 1983 ಮತ್ತು 2015ರ ತಿದ್ದುಪಡಿಗಳನ್ವಯ ಈ ಕೆಳಕಂಡ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿನ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳನ್ನು ಭರ್ತಿಮಾಡಲು **ON-LINE** ಮೂಲಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ.

| ಕ್ರ.ಸಂ | ಇಲಾಖೆಗಳ ಹೆಸರು | ಬೆರಳಚ್ಚುಗಾರರು | | ಶೀಘ್ರಲಿಪಿಗಾರರು | |
|---|---|---|---|---|---|
| | | ಉಳಿಕೆ ಮೂಲ ವೃಂದದ ಹುದ್ದೆಗಳು | ಹೈ.ಕ ಹುದ್ದೆಗಳು | ಉಳಿಕೆ ಮೂಲ ವೃಂದದ ಹುದ್ದೆಗಳು | ಹೈ.ಕ ಹುದ್ದೆಗಳು |
| 1 | ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು | 06 | 01 | 03 | 01 |
| 2 | ಕರ್ನಾಟಕ ವಿಮಾ ಇಲಾಖೆ | – | 03 | – | 01 |
| 3 | ವಾಣಿಜ್ಯ ತೆರಿಗೆಗಳ ಇಲಾಖೆ | 236 | 33 | – | 10 |
| 4 | ಅಲ್ಪ ಸಂಖ್ಯಾತರ ನಿರ್ದೇಶನಾಲಯ | – | – | 01 | – |
| 5 | ಕೈಗಾರಿಕಾ ಮತ್ತು ವಾಣಿಜ್ಯ ನಿರ್ದೇಶನಾಲಯ | – | 01 | – | 02 |
| 6 | ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ | – | – | 02 | – |
| 7 | ಆಯುಷ್ ಇಲಾಖೆ | – | 03 | – | 01 |
| 8 | ಪೊಲೀಸ್ ಮಹಾ ನಿರ್ದೇಶಕರು, ಗೃಹ ರಕ್ಷಕ ಹಾಗೂ ಪೌರರಕ್ಷಣಾ ಇಲಾಖೆ | – | 02 | 01 | – |
| 9 | ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಅಗ್ನಿ ಶಾಮಕ ಮತ್ತು ತುರ್ತು ಸೇವೆಗಳ ಇಲಾಖೆ | – | – | 01 | – |
| 10 | ರಾಜ್ಯ ಲೆಕ್ಕ ಪತ್ರ ಇಲಾಖೆ | 31 | 08 | 02 | – |
| 11 | ರೇಷ್ಮೆ ಕೃಷಿ ಮತ್ತು ಅಭಿವೃದ್ಧಿ ಇಲಾಖೆ | – | 05 | – | 01 |
| 12 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ | – | 06 | 01 | – |
| 13 | ತೋಟಗಾರಿಕೆ ನಿರ್ದೇಶನಾಲಯ | – | 08 | – | 01 |
| 14 | ಮೀನುಗಾರಿಕೆ ನಿರ್ದೇಶನಾಲಯ | – | 07 | – | – |
| 15 | ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ನಿರ್ದೇಶನಾಲಯ | 07 | 03 | – | – |
| 16 | ಭೂಮಾಪನ ಕಂದಾಯ ಮತ್ತು ಭೂದಾಖಲೆಗಳ ಇಲಾಖೆ | – | 07 | – | – |
| 17 | ಪದವಿ ಪೂರ್ವಶಿಕ್ಷಣ ಇಲಾಖೆ | – | 01 | – | 01 |
| 18 | ಕನ್ನಡ ಮತ್ತು ಸಂಸ್ಕೃತಿ ಇಲಾಖೆ | – | 04 | 01 | – |
| 19 | ಸಹಕಾರ ಇಲಾಖೆ | – | 14 | – | 03 |
| 20 | ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆ | – | 04 | – | 02 |
| 21 | ಕೈಮಗ್ಗ ಮತ್ತು ಜವಳಿ ಅಭಿವೃದ್ಧಿ ಇಲಾಖೆ | – | – | – | 01 |
| 22 | ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಇಲಾಖೆ | – | 06 | – | 01 |
| 23 | ಯುವಜನ ಸೇವಾ ಮತ್ತು ಕ್ರೀಡಾ ನಿರ್ದೇಶನಾಲಯ | – | 01 | – | 01 |
| 24 | ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ | – | 03 | – | – |
| 25 | ಭಾಷಾಂತರ ನಿರ್ದೇಶನಾಲಯ | 01 | – | 03 | – |
| 26 | ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆ | – | – | 02 | – |
| 27 | ಯುವ ಸಬಲೀಕರಣ ಮತ್ತು ಕ್ರೀಡಾ ನಿರ್ದೇಶನಾಲಯ | – | – | 02 | – |
| 28 | ಕಾನೂನು ಮಾಪನ ಶಾಸ್ತ್ರ ಇಲಾಖೆ | – | 04 | – | 01 |
| 29 | ಸಾರ್ವಜನಿಕ ಗ್ರಂಥಾಲಯ ಇಲಾಖೆ | – | 07 | – | – |

| ಕ್ರ.ಸಂ | ಇಲಾಖೆಗಳ ಹೆಸರು | ಬೆರಳಚ್ಚುಗಾರರು | | ಶೀಘ್ರಲಿಪಿಗಾರರು | |
|---|---|---|---|---|---|
| | | ಉಳಿಕೆ ಮೂಲ ವೃಂದದ ಹುದ್ದೆಗಳು | ಹೈ.ಕ ಹುದ್ದೆಗಳು | ಉಳಿಕೆ ಮೂಲ ವೃಂದದ ಹುದ್ದೆಗಳು | ಹೈ.ಕ ಹುದ್ದೆಗಳು |
| 30 | ಕರ್ನಾಟಕ ಗ್ಯಾಸೆಟಿಯರ್ ಇಲಾಖೆ | – | 01 | – | – |
| 31 | ಅಬಕಾರಿ ಇಲಾಖೆ | – | 02 | – | – |
| 32 | ತಾಂತ್ರಿಕ ಶಿಕ್ಷಣ ಇಲಾಖೆ | – | 16 | – | – |
| 33 | ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕದ ಕಾರಾಗೃಹಗಳ ಇಲಾಖೆ | – | 01 | – | – |
| 34 | ಜಿಲ್ಲಾಧಿಕಾರಿಗಳು, ಕಲಬುರಗಿ ಜಿಲ್ಲೆ | – | – | – | 11 |
| 35 | ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ (ನಿ) ಇಲಾಖೆ | – | – | 02 | – |
| 36 | ಪೌರಾಡಳಿತ ನಿರ್ದೇಶನಾಲಯ ಬೆಂಗಳೂರು | – | – | 02 | 01 |
| 37 | ಪೌರಾಡಳಿತ ನಿರ್ದೇಶನಾಲಯದ ವ್ಯಾಪ್ತಿಯಲ್ಲಿನ ನಗರ ಸ್ಥಳೀಯ ಸಂಸ್ಥೆಗಳು | – | – | – | 12 |
| 38 | ಪೌರಾಡಳಿತ ನಿರ್ದೇಶನಾಲಯ–ಮಹಾನಗರ ಪಾಲಿಕೆ (ಕಲ್ಬುರ್ಗಿ ಮತ್ತು ಬಳ್ಳಾರಿ) | – | – | – | 20 |
| | | **281** | **151** | **23** | **71** |
| | | **432** | | **94** | |
| | **ಒಟ್ಟು** | **526** | | | |

- **ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 16–11–2016**
- **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 15–12–2016 (ರಾತ್ರಿ 11–45 ಘಂಟೆಯೊಳಗೆ)**
- **ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 16–12–2016 (ಅಂಚೆ ಕಛೇರಿಯ ಕಾರ್ಯದ ವೇಳೆಯೊಳಗೆ)**

**ವಿಶೇಷ ಸೂಚನೆ:**

1 ಅರ್ಜಿಗಳನ್ನು ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ, ಇಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

2 ಈ ಅಧಿಸೂಚನೆಯಲ್ಲಿ ಪ್ರಕಟಿಸುವ ಇಲಾಖಾವಾರು ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ. ಅಲ್ಲದೆ ಈ ಬಗ್ಗೆ ಆಯೋಗದ ತೀರ್ಮಾನವೇ ಅಂತಿಮವಾಗಿರುತ್ತದೆ.

3 ಅಭ್ಯರ್ಥಿಗಳು On-Line ಮೂಲಕ ಅರ್ಜಿ ಸಲ್ಲಿಸುವ ಮುನ್ನ ನೀಡಿರುವ ಸೂಚನೆಗಳನ್ವಯ ಗಮನಿಸಿ ಭರ್ತಿ ಮಾಡತಕ್ಕದ್ದು.

4 ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮಕೈಗೊಳ್ಳುವುದು.

**ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು:–**

| | | | |
|---|---|---|---|
| ಸಾ.ಅ | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ | ಪರಿಶಿಷ್ಟ ಜಾತಿ | SC | Scheduled Caste |
| ಪ.ಪಂ | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ–1 | ಪ್ರವರ್ಗ–1 | Cat – 1 | Category – I |
| 2ಎ | ಪ್ರವರ್ಗ–2ಎ | 2A | Category – 2A |
| 2ಬಿ | ಪ್ರವರ್ಗ–2ಬಿ | 2B | Category – 2B |
| 3ಎ | ಪ್ರವರ್ಗ–3ಎ | 3A | Category – 3A |
| 3ಬಿ | ಪ್ರವರ್ಗ–3ಬಿ | 3B | Category – 3B |
| ಮಾ.ಸೈ | ಮಾಜಿ ಸೈನಿಕ | Ex-MP | Ex-Military Person |
| ಗ್ರಾ.ಅ. | ಗ್ರಾಮೀಣ ಅಭ್ಯರ್ಥಿ | Rural | Rural Candidate |

| | | | |
|---|---|---|---|
| ಕ.ಮಾ.ಅ | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಅಂ.ವಿ. | ಅಂಗವಿಕಲ | PH | Physically Handicapped Person |
| ಯೋ.ನಿ.ಅ | ಯೋಜನೆಯಿಂದ ನಿರಾಶ್ರಿತ ಅಭ್ಯರ್ಥಿ | PDP | Project Displaced Person |
| ಹೈ.ಕ. | ಹೈದ್ರಾಬಾದ್–ಕರ್ನಾಟಕ | HK | Hyderabad-Karnataka |

**2. ಶುಲ್ಕ:–**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ₹: 300/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಅಂಗವಿಕಲ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ | ₹: 25/– |

2.1 ಅರ್ಜಿಗಳನ್ನು ON-LINE ಮೂಲಕ ಭರ್ತಿ ಮಾಡಿ ನಿಗಧಿತ ಶುಲ್ಕವನ್ನು ಕರ್ನಾಟಕದ ಯಾವುದೇ ಎಲೆಕ್ಟ್ರಾನಿಕ್ ಅಂಚೆ ಕಛೇರಿಯ ಕೆಲಸದ ವೇಳೆಯೊಳಗೆ (e-Payment Post Offices Only) ಪಾವತಿ ಮಾಡಬಹುದು. ಇದನ್ನು ಹೊರತುಪಡಿಸಿ ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇತ್ಯಾದಿಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**3. ಅಭ್ಯರ್ಥಿಗಳು ON-LINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು.**

**ಹಂತ 1:–** ಅಭ್ಯರ್ಥಿಗಳು ಆಯೋಗದ ಅಧಿಕೃತ ವೆಬ್‌ಸೈಟ್ http://kpsc.kar.nic.in/Home page ನಲ್ಲಿ **APPLY ON-LINE** ಲಿಂಕ್ ರಲ್ಲಿ APPLICATION FOR THE POSTS OF STENOGRAPHERS/TYPISTS ಅನ್ನು ಒತ್ತಿದಲ್ಲಿ ಮುಂದಿನ ಪುಟದಲ್ಲಿ ಅಧಿಸೂಚನೆಯನ್ನು ಡೌನ್ ಲೋಡ್ ಮಾಡಿಕೊಳ್ಳಲು ಸೂಚನೆಗಳು ಇರುತ್ತವೆ. ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಧಿಸೂಚನೆಯನ್ನು ಓದತಕ್ಕದ್ದು. ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕ/ಕೊನೆಯ ದಿನಾಂಕ ಹಾಗೂ ಶುಲ್ಕ ಪಾವತಿಸಲು ಕೊನೆಯ ದಿನಾಂಕದ ವಿವರಗಳು ಮೂಡುತ್ತವೆ. ಈ ಪುಟದಲ್ಲಿ New Registration ಹಾಗೂ Already Registered Button ಗಳು ಇದ್ದು ನೀವು ಹೊಸದಾಗಿ ನೊಂದಾಯಿಸಬೇಕಿದ್ದಲ್ಲಿ New Registration Button ಒತ್ತಬೇಕು ಅಥವಾ ಈಗಾಗಲೇ ನೊಂದಾಯಿಸಿದ್ದಲ್ಲಿ Already Registered Button ಅನ್ನು ಒತ್ತಬೇಕು.

**ಹಂತ 2:–** New Registration Button ಒತ್ತಿದಲ್ಲಿ Registration ನಮೂನೆ ಮೂಡುತ್ತದೆ. ಇದರಲ್ಲಿನ ಅಗತ್ಯ ಮಾಹಿತಿಯನ್ನು ಅಂದರೆ ಹೆಸರು, ತಂದೆ/ತಾಯಿಯ /ಗಂಡ /ಹೆಂಡತಿಯ ಹೆಸರು, ಜನ್ಮ ದಿನಾಂಕ ಹಾಗೂ ಇ–ಮೇಲ್ ವಿಳಾಸವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು. ಈ ಮಾಹಿತಿಯು ಸರಿಯಾಗಿದೆ ಎಂದು ಚೆಕ್ ಬಾಕ್ಸ್‌ನಲ್ಲಿ I Agree ಎಂದು ಒತ್ತಿದ ನಂತರ Submit Button ಅನ್ನು ಒತ್ತಬೇಕು. ಆಗ ನಿಮಗೆ Login ID ಮತ್ತು Password ಅನ್ನು ನಿಮ್ಮ ಇಮೇಲ್ ವಿಳಾಸಕ್ಕೆ ರವಾನಿಸಲಾಗುತ್ತದೆ.

**ಹಂತ 3:–** Submit Button ಅನ್ನು ಒತ್ತಿದ ಕೂಡಲೇ ನೀವು Registration ನಮೂನೆಯಲ್ಲಿ ಭರ್ತಿ ಮಾಡಿದ ವಿವರಗಳು ಪರದೆಯಲ್ಲಿ ಮೂಡುತ್ತವೆ. ಈ ಪುಟದ ಮೇಲ್ಭಾಗದಲ್ಲಿ ಕಾಣಿಸುವ Logout Button ಅನ್ನು ಒತ್ತಿ Login ಪುಟದಲ್ಲಿ ನಿಮ್ಮ Login ID ಮತ್ತು Password ಅನ್ನು ಉಪಯೋಗಿಸಿ Login Button ಒತ್ತಿದಲ್ಲಿ Registration ನಮೂನೆಯಲ್ಲಿ ಭರ್ತಿ ಮಾಡಿದ ಎಲ್ಲಾ ವಿವರಗಳು ಮೂಡುತ್ತವೆ. ಈ ಪುಟದಲ್ಲಿನ ಮೇಲ್ಭಾಗದಲ್ಲಿ Continue Button ಅನ್ನು ಒತ್ತಿದಲ್ಲಿ ಅರ್ಜಿ ನಮೂನೆ ಮೂಡುತ್ತದೆ. ಈ ಅರ್ಜಿ ನಮೂನೆ ಮೇಲೆ ಮೂಡುವ 04 Button ಗಳಾದ Personal Details/Qualification Details/ Additional Details and Documents Upload & Payment Details Button ಗಳಿದ್ದು Personal Details Button ಒತ್ತಿದಲ್ಲಿ ನೀವು Registration ನಮೂನೆಯಲ್ಲಿ ಭರ್ತಿ ಮಾಡಿದ ವಿವರಗಳು ಪರದೆಯಲ್ಲಿ ಮೂಡುತ್ತವೆ. ನಂತರ Qualification Details/ Additional Details ಪುಟದ ಮೇಲ್ಭಾಗದಲ್ಲಿ ನೀವು ಶೀಘ್ರಲಿಪಿಗಾರರು ಅಥವಾ ಬೆರಳಚ್ಚುಗಾರರ ಅಥವಾ ಎರಡೂ ಹುದ್ದೆಗಳಿಗೆ ಅರ್ಜಿ ಸಲ್ಲಿಸುವಿರಿ ಎಂಬ ಮಾಹಿತಿ ನೀಡಿ ವಿವರಗಳನ್ನು ಭರ್ತಿ ಮಾಡಿ, ಹುದ್ದೆಯ /ಇಲಾಖೆಯ ಆದ್ಯತೆಗಳನ್ನು ನೀಡ ಬೇಕು. ಆಯಾ ಪುಟಗಳಲ್ಲಿನ ಎಲ್ಲಾ ವಿವರಗಳನ್ನು ಭರ್ತಿ ಮಾಡತಕ್ಕದ್ದು. ಅರ್ಜಿಯನ್ನು ಭರ್ತಿ ಮಾಡಿದ ನಂತರ ನಮೂದಿಸಿದ ವಿವರಗಳನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲಿಸಿಕೊಳ್ಳಲು ಪ್ರತಿ ಪುಟದಲ್ಲಿಯೂ Save & Continue Button ಅನ್ನು ಒತ್ತಿ ಮುಂದುವರೆಯಬೇಕು. ನಿಮ್ಮ ಅರ್ಜಿಯಲ್ಲಿ ಯಾವುದೇ ವಿವರಗಳ ಬದಲಾವಣೆ ಅಗತ್ಯವಿದ್ದರೆ ಆಯಾ ಪುಟದಲ್ಲಿ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು.

**ಹಂತ 4:–** Documents Upload & Payment Details Button ಅನ್ನು ಒತ್ತಿ ನೀವು ಸ್ಕ್ಯಾನ್ ಮಾಡಿಕೊಂಡಿರುವ ಸಹಿ ಹಾಗೂ ಭಾವಚಿತ್ರವನ್ನು ನೀಡಿರುವ ಸೂಚನೆಗಳಂತೆ upload ಮಾಡಬೇಕು. ನಿಮ್ಮ ವಿದ್ಯಾರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿಗಳ ಸ್ಕ್ಯಾನ್ ಮಾಡಿರುವ ಪ್ರತಿಗಳನ್ನು ಕಡ್ಡಾಯವಾಗಿ upload ಮಾಡತಕ್ಕದ್ದು. ಸಹಿ, ಭಾವಚಿತ್ರ ಹಾಗೂ ದಾಖಲೆಗಳ ಅಳತೆಗಳು ಈ ಕೆಳಕಂಡಂತಿರಬೇಕು:

| | |
|---|---|
| | **ಪಾಸ್ ಪೋರ್ಟ್ ಭಾವಚಿತ್ರ ಹಾಗೂ ಸಹಿ ಅಳತೆ** |
| **ಪಾಸ್ ಪೋರ್ಟ್ ಭಾವಚಿತ್ರ ಅಳತೆ** | **80mm** 30mm |
| **File Size < 80 kb** | |
| **DPI Setting = 100 dpl** | |
| **Image Scale = 100%** | |
| **Color = True Color** | |
| **Type = JPEG/JPG** | |
| **ಸಹಿ ಅಳತೆ** | 35mm |
| **ದಾಖಲೆಗಳ ಅಳತೆ** | **Pdf / JPEG/JPG ನಮೂನೆ – 150 kb** |

**ಹಂತ–5:–** ಸಹಿ, ಭಾವಚಿತ್ರ, ವಯೋಮಿತಿ/ವಿದ್ಯಾರ್ಹತೆ/ಮೀಸಲಾತಿಗೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು upload ಮಾಡಿದ ನಂತರ ದೃಢೀಕರಣವನ್ನು ಓದಿ I agree Text Box ನಲ್ಲಿ ನಿಮ್ಮ ಒಪ್ಪಿಗೆಯನ್ನು ನೀಡಬೇಕು. ನಿಮ್ಮ ಅರ್ಜಿಯನ್ನು ಪರಿಶೀಲಿಸಲು Preview Application ಅನ್ನು ಒತ್ತಿ ಅರ್ಜಿಯ ಯಾವುದೇ ವಿವರಗಳ ಬದಲಾವಣೆ ಅಗತ್ಯವಿದ್ದರೆ ತಿದ್ದುಪಡಿಗಳನ್ನು ಮಾಡಬಹುದು. Submit Button ಅನ್ನು ಒತ್ತಿದಲ್ಲಿ ಭರ್ತಿಮಾಡಿರುವ ಅರ್ಜಿಯ ನಮೂನೆಯನ್ನು ನೋಡಲು Application Form Button ಅನ್ನು ಒತ್ತಬೇಕು. ಈ ನಮೂನೆಯ ಮೇಲ್ಭಾಗದಲ್ಲಿರುವ Print Form Button ನ್ನು ಒತ್ತಿ ನೀವು ಭರ್ತಿ ಮಾಡಿರುವ ಅರ್ಜಿ ನಮೂನೆಯನ್ನು ಮುದ್ರಿಸಿಕೊಳ್ಳಬಹುದು. ನಂತರ Challan Download Button ಅನ್ನು ಒತ್ತಿದ್ದಲ್ಲಿ ಶುಲ್ಕ ಪಾವತಿಸಲು ದ್ವಿಪ್ರತಿಯಲ್ಲಿ ಚಲನ್ ಪರದೆಯ ಮೇಲೆ ಮೂಡುತ್ತಿದ್ದು, ಇದರಲ್ಲಿ Save ಅಥವಾ Download Button ಗಳಿರುತ್ತವೆ. Challan Download ಮಾಡಿಕೊಂಡು ಕರ್ನಾಟಕ ರಾಜ್ಯದಲ್ಲಿನ ಯಾವುದೇ ಇ–ಪಾವತಿ ಅಂಚೆ ಕಛೇರಿಯಲ್ಲಿ ನಿಗದಿತ ಅರ್ಜಿ ಶುಲ್ಕವನ್ನು ಪಾವತಿ ಮಾಡಿ, ಅಂತಿಮವಾಗಿ ಪೋಸ್ಟ್ ಆಫೀಸ್ ಸ್ಟಿಕ್ಕರ್ ಅನ್ನು ನಿಮ್ಮ Challan ಪ್ರತಿಯ ಮೇಲೆ ಅಂಟಿಸುವುದರಿಂದ ನಿಮ್ಮ ಶುಲ್ಕ ಪಾವತಿಯನ್ನು ದೃಢಪಡಿಸಲಾಗುತ್ತದೆ.

**Submit Button ಅನ್ನು ಒತ್ತಿದ ನಂತರ ಅರ್ಜಿಯಲ್ಲಿ ಯಾವುದೇ ತಿದ್ದುಪಡಿಗಳನ್ನು ಮಾಡಲು ಅವಕಾಶ ಇರುವುದಿಲ್ಲ.**

**Note:- ಶುಲ್ಕವನ್ನು ಪಾವತಿಸಲು ನಿಗದಿಪಡಿಸಿದ ಕೊನೆಯ ದಿನಾಂಕ: 16–12–2016ರ (ಅಂಚೆ ಕಛೇರಿಗಳ ಕಾರ್ಯದ ವೇಳೆಯೊಳಗೆ) ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ.**

**ಹಂತ 6:–** ಶುಲ್ಕ ಪಾವತಿಯ ಎರಡು ದಿನಗಳ ನಂತರ ಶುಲ್ಕ ಸ್ವೀಕೃತಿಯ ವಿವರಗಳನ್ನು www.Karnatakapost. gov.in ರಲ್ಲಿ ನೋಡಬಹುದು. ಈ ವಿಷಯದಲ್ಲಿ ಏನಾದರೂ ತೊಂದರೆಯಾದಲ್ಲಿ Help line ಅನ್ನು ಸಂಪರ್ಕಿಸಬಹುದು.

**ಹಂತ–7:–** ಕ್ರಮಬದ್ಧವಾಗಿ ಅರ್ಜಿಯನ್ನು ಸಲ್ಲಿಸಿದ ಅಭ್ಯರ್ಥಿಗಳಿಗೆ ಅವರ ಇ–ಮೇಲ್ ವಿಳಾಸಕ್ಕೆ ಅರ್ಜಿ ಸ್ವೀಕೃತಿಯ ಮಾಹಿತಿಯನ್ನು ಕಳುಹಿಸಲಾಗುವುದು.

3.1 ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಮಿಂಚಂಚೆ (ಇ–ಮೇಲ್) ವಿಳಾಸವನ್ನು (Unique Email ID) ಕಡ್ಡಾಯವಾಗಿ ನಮೂದಿಸತಕ್ಕದ್ದು.

3.2 ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

3.3 ಶುಲ್ಕವನ್ನು ಪಾವತಿಸಲು ನಿಗದಿಪಡಿಸಿದ ಕೊನೆಯ ದಿನಾಂಕ/ಸಮಯದ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ.

**ವಿಶೇಷ ಸೂಚನೆ:** On-line ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ **ಸಹಾಯವಾಣಿ (Help line) No. 9986760557** ಮೂಲಕ ಬೆಳಿಗ್ಗೆ 9–00 ಗಂಟೆಯಿಂದ ಸಂಜೆ 6–00 ಗಂಟೆಯವರೆಗೆ ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**4. ಅರ್ಹತಾ ಷರತ್ತುಗಳು:–**

(ಅ) ಭಾರತೀಯ ನಾಗರಿಕನಾಗಿರತಕ್ಕದ್ದು.

(ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

(ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

(ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**5. ಶೈಕ್ಷಣಿಕ ವಿದ್ಯಾರ್ಹತೆ:**

**ಕರ್ನಾಟಕ ಸಿವಿಲ್ ಸೇವಾ (ಬೆರಳಚ್ಚುಗಾರರ ಮತ್ತು ಶೀಘ್ರಲಿಪಿಗಾರರ ಹುದ್ದೆಗಳ ನೇಮಕಾತಿ) ನಿಯಮಗಳು 1983 ಹಾಗೂ ತಿದ್ದುಪಡಿ ನಿಯಮ–3ರನ್ವಯ (ಸರ್ಕಾರಿ ಪತ್ರ ಸಂಖ್ಯೆ: ಸಿಆಸುಇ 7 ಸೇವನೆ 2014, ದಿನಾಂಕ: 15.12.2015 ರನ್ವಯ)**

**(ಅ) ಶೀಘ್ರಲಿಪಿಗಾರರ ಹುದ್ದೆಗಳಿಗೆ :**

1. ಪದವಿ ಪೂರ್ವ ಶಿಕ್ಷಣ (PUC) ಅಥವಾ ಮೂರು ವರ್ಷದ ಕಮರ್ಷಿಯಲ್ ಪ್ರಾಕ್ಟೀಸ್ ಇನ್ ಡಿಪ್ಲೋಮಾ ಅಥವಾ ತತ್ಸಮಾನ ವಿದ್ಯಾರ್ಹತೆ.
2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಸೀನಿಯರ್ ಗ್ರೇಡ್ ಶೀಘ್ರಲಿಪಿ ಹಾಗೂ ಕನ್ನಡ ಸೀನಿಯರ್ ಗ್ರೇಡ್ ಬೆರಳಚ್ಚು ಪರೀಕ್ಷೆ ಅಥವಾ ತತ್ಸಮಾನ ವಿದ್ಯಾರ್ಹತೆಯಲ್ಲಿ ಉತ್ತೀರ್ಣರಾಗಿರಬೇಕು.

➢ **ಕನ್ನಡ ಶೀಘ್ರಲಿಪಿ ಪ್ರೊಫಿಷಿಯನ್ಸಿ ಗ್ರೇಡ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳಿಗೆ ಅರ್ಹ ಪರೀಕ್ಷೆಗಳಲ್ಲಿ ಪಡೆದ ಶೇಕಡ ಒಟ್ಟು ಅಂಕಗಳಿಗೆ 5% ರಷ್ಟು ಕೃಪಾಂಕ ಸೇರಿಸಲಾಗುವುದು.**

**(ಆ) ಬೆರಳಚ್ಚುಗಾರರ ಹುದ್ದೆಗಳಿಗೆ :**

1. ಪದವಿ ಪೂರ್ವ ಶಿಕ್ಷಣ (PUC) ಅಥವಾ ಮೂರು ವರ್ಷದ ಕಮರ್ಷಿಯಲ್ ಪ್ರಾಕ್ಟೀಸ್ ಇನ್ ಡಿಪ್ಲೋಮಾ ಅಥವಾ ತತ್ಸಮಾನ ವಿದ್ಯಾರ್ಹತೆ.
2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಸೀನಿಯರ್ ಗ್ರೇಡ್ ಬೆರಳಚ್ಚು ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

